ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಚಿಕ್ಕಮಗಳೂರಿನಲ್ಲಿ ಕೈಗೊಂಡ ಅಭಿವೃದ್ಧಿ ಕಾರ್ಯಗಳು

ಶ್ರೀ ಎಸ್. ಎಲ್. ಭೋಜೇಗೌಡ(ಶಿಕ್ಷಕರ ಕ್ಷೇತ್ರ) –

281 (469) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕಳೆದ ಒಂದು ವರ್ಷದಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಪ್ರವಾಸೋದ್ಯಮ ಇಲಾಖೆಯಿಂದ ಕೈಗೊಂಡ ಅಭಿವೃದ್ಧಿ ಕಾರ್ಯಗಳು ಯಾವುವು;

(ಆ) ಸದರಿ ಅಭಿವೃದ್ಧಿ ಕಾಮಗಾರಿಗಳಿಗೆ ಬಿಡುಗಡೆಗೊಂಡ ಅನುದಾನವೆಷ್ಟು; ಈ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆ ಯಾವ ಹಂತದಲ್ಲಿ ನಡೆಯುತ್ತದೆ;

(ಇ) ಟೆಂಡರ್ ಕರೆದಿದ್ದಲ್ಲಿ, ಕಾಮಗಾರಿ ಪ್ರಾರಂಭವಾಗಿದೆಯೇ; ಕಾಮಗಾರಿ ಪೂರೈಸಲು ತೆಗೆದುಕೊಂಡಿರುವ ಕಾಲಮಿತಿ ಎಷ್ಟು?